WPP-47/2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೬ | ಬೆಂಗಳೂರು, ಗುರುವಾರ, ನವೆಂಬರ್ ೩, ೨೦೧೧ (ಕಾರ್ತೀಕ ೧೨, ಶಕ ವರ್ಷ ೧೯೩೩) | ಸಂಚಿಕೆ ೪೩

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 12 ಸಾಂಹಅ 2011, ಬೆಂಗಳೂರು, ದಿನಾಂಕ: 12–07–2011**

ಸರ್ಕಾರಿ ಅಧಿಸೂಚನೆ ಸಂಖ್ಯೆ ಎಫ್‌ಡಿ 8 ಸಾಂಹಅ 2010 ದಿನಾಂಕ:27.03.2010ರಲ್ಲಿ ಕಾರ್ಪೋರೇಷನ್ ಬ್ಯಾಂಕ್ ಪ್ರಾಯೋಜಕತ್ವದ ಚಿಕ್ಕಮಗಳೂರು–ಕೊಡಗು ಗ್ರಾಮೀಣ ಬ್ಯಾಂಕ್ ಹಾಗೂ ಎಸ್‌ಬಿಐ ಪ್ರಾಯೋಜಕತ್ವದ ಕೃಷ್ಣ ಗ್ರಾಮೀಣ ಬ್ಯಾಂಕು ಹಾಗೂ ವಿಜಯಾಬ್ಯಾಂಕ್ ಪ್ರಾಯೋಜಕತ್ವದ ವಿಶ್ವೇಶ್ವರಯ್ಯ ಗ್ರಾಮೀಣ ಬ್ಯಾಂಕುಗಳ ನಿರ್ದೇಶಕ ಮಂಡಳಿಗಳಿಗೆ ಅದರಲ್ಲಿ ಸೂಚಿಸಿದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹಾಗೂ ಉಪ ಕಾರ್ಯದರ್ಶಿ (ಅಭಿವೃದ್ಧಿ) ಜಿಲ್ಲಾ ಪಂಚಾಯತ್, ಮಂಡ್ಯ ಜಿಲ್ಲೆ, ಇವರನ್ನು ದಿನಾಂಕ:17.05.2009 ರಿಂದ 2 ವರ್ಷಗಳ ಅವಧಿಗೆ ರಾಜ್ಯದ ನಾಮನಿರ್ದೇಶಕರುಗಳನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು. ಸದರಿ ಅವಧಿಯು ದಿ:16.05.2011ಕ್ಕೆ ಅಂತ್ಯಗೊಂಡಿರುತ್ತದೆ.

ಪ್ರಾದೇಶಿಕ ಗ್ರಾಮೀಣ ಬ್ಯಾಂಕ್ ಅಧಿನಿಯಮ 1976ರ ಸೆಕ್ಷನ್ 9(1)(ಇ) ಮತ್ತು ಸೆಕ್ಷನ್ 10ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಆಯಾಯ ಪ್ರಾದೇಶಿಕ ಗ್ರಾಮೀಣಬ್ಯಾಂಕ್ ಹೆಸರಿನ ಮುಂದೆ ಸೂಚಿಸಿರುವ ಅಧಿಕಾರಿಗಳನ್ನು ಆ ಗ್ರಾಮೀಣ ಬ್ಯಾಂಕಿನ ಮಂಡಳಿಯ ನಾಮನಿರ್ದೇಶಕರುಗಳನ್ನಾಗಿ ದಿನಾಂಕ:17.05.2011 ರಿಂದ 2 ವರ್ಷಗಳ ಅವಧಿಗೆ ಮುಂದುವರಿಸಲಾಗಿದೆ.

| ಕ್ರ. ಸಂ. | ಪ್ರಾದೇಶಿಕ ಗ್ರಾಮೀಣ ಬ್ಯಾಂಕಿನ ಹೆಸರು | ಬ್ಯಾಂಕಿನ ನಿರ್ದೇಶಕರ ಮಂಡಳಿಗೆ ನಾಮನಿರ್ದೇಶನಗೊಂಡ ಅಧಿಕಾರಿಗಳು |
|---|---|---|
| 1. | ಚಿಕ್ಕಮಗಳೂರು–ಕೊಡಗು ಗ್ರಾಮೀಣ ಬ್ಯಾಂಕ್, ಚಿಕ್ಕಮಗಳೂರು | 1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾಪಂಚಾಯತ್, ಚಿಕ್ಕಮಗಳೂರು ಜಿಲ್ಲೆ.<br>2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾಪಂಚಾಯತ್, ಕೊಡಗು ಜಿಲ್ಲೆ |
| 2. | ಕೃಷ್ಣ ಗ್ರಾಮೀಣ ಬ್ಯಾಂಕ್, ಗುಲ್ಬರ್ಗಾ | 1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾಪಂಚಾಯತ್, ಗುಲ್ಬರ್ಗಾ ಜಿಲ್ಲೆ<br>2) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾಪಂಚಾಯತ್, ಬೀದರ್ ಜಿಲ್ಲೆ |
| 3. | ವಿಶ್ವೇಶ್ವರಯ್ಯ ಗ್ರಾಮೀಣ ಬ್ಯಾಂಕ್ ಮಂಡ್ಯ | 1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾಪಂಚಾಯತ್, ಮಂಡ್ಯ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭವಾನಿ ದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಾಂಸ್ಥಿಕ ಹಣಕಾಸು)

ಪಿ.ಆರ್. 759

**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 68 ಎಲ್‌ಡಬ್ಲ್ಯೂಎ 2011, ಬೆಂಗಳೂರು, ದಿನಾಂಕ:15-07-2011**

ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ: 14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯನ್ನು ಅಧಿಸೂಚನೆ ಸಂಖ್ಯೆ: ಕಾಇ 135 ಎಲ್‌ಡಬ್ಲ್ಯೂಎ 2010, ದಿ:03.01.2011ರಲ್ಲಿ ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ 6 ತಿಂಗಳ ಅವಧಿಯವರೆಗೆ ಜಾರಿಯಲ್ಲಿರುವಂತೆ ಘೋಷಿಸಲಾಗಿತ್ತು.

ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಅವಧಿಯನ್ನು ಮುಂದಿನ 6 ತಿಂಗಳ ಅವಧಿಗೆ ವಿಸ್ತರಿಸಲು ಸರ್ಕಾರವು ಪರಿಗಣಿಸಿದೆ. ಆದುದರಿಂದ, ಕೈಗಾರಿಕಾ ವಿವಾದಗಳ ಅಧಿನಿಯಮ 1947 (ಕೇಂದ್ರಾಧಿನಿಯಮ 1947ರ ಸಂಖ್ಯೆ:14) ಕಲಂ 2 ಖಂಡ (ಎನ್) ಉಪಖಂಡ (6)ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯನ್ನು ಸಾರ್ವಜನಿಕ ಉಪಯುಕ್ತ ಸೇವೆ ಎಂಬುದಾಗಿ ದಿನಾಂಕ:03.07.2011 ರಿಂದ ಜಾರಿಗೆ ಬರುವಂತೆ ಮುಂದಿನ 6 ತಿಂಗಳ ಅವಧಿಯವರೆಗೆ ವಿಸ್ತರಿಸಿ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**

ಪಿ.ಆರ್. 760

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ.

**AGRICULTURE SECRETARIAT**

**NOTIFICATION - IV**

**NO. AD/30/AMS/2011, Bangalore, Dated: 16.07.2011**

In exercise of the powers conferred by clause-(e) of sub section (1) of the section 12AA of Essential Commodities Act, 1955, (Central Act 10 of 1955), the Government of Karnataka hereby authorise the Officers specified in Column-(2) of the Table below for the purposes of the said Clause in respect of the areas specified in the corresponding entries in column (3) thereof.

**TABLE**

| Sl. No. | Designation of Officers | Areas |
|---|---|---|
| **1** | **2** | **3** |
| 1. | The Joint Director of Agriculture-Yadgir District | within their respective jurisdiction |
| 2. | All the Assistant Directors of Agriculture (Subject Matter Specialists) working in the Office of the Joint Director of Agriculture Yadgir District | within their respective jurisdiction |
| 3. | Agricultural Officer (Information) and Agricultural Officer (Inputs) working in the office of the Joint Director of Agriculture, Yadgir District. | within their respective jurisdiction |

By Order and in the Name of the Governor of Karnataka

**PARANDHAMAIAH**

PR-761

Under Secretary to Government,

Agriculture Department.

**AGRICULTURE SECRETARIAT**

**NOTIFICATION - II**

**NO. AD/30/AMS/2011, Bangalore, Dated: 16.07.2011**

In exercise of the powers conferred by clause-12 of the Seeds (Control) Order, 1983, the Government of Karnataka here by appoint the Officers specified in Column-(2) of the Table below to be the Seed Inspectors for the purpose of the said Order in respect of the area specified in the corresponding entries in column (3) thereof for enforcement of Seeds (Control) Order 1983.

**TABLE**

| Sl. No. | Designation of Officers | Areas |
|---|---|---|
| **1** | **2** | **3** |
| 1. | The Joint Director of Agriculture-Yadgir District | within their respective jurisdiction |

| Sl. No. | Designation of Officers | Areas |
|---|---|---|
| 1 | 2 | 3 |
| 2. | All the Assistant Directors of Agriculture (Subject Matter Specialists) working in the Office of the Joint Director of Agriculture Yadgir District | within their respective jurisdiction |
| 3. | Agricultural Officer (Information) and Agricultural Officer (Inputs) working in the office of the Joint Director of Agriculture, Yadgir District. | within their respective jurisdiction |

By Order and in the Name of the Governor of Karnataka

**PARANDHAMAIAH**

Under Secretary to Government,

Agriculture Department.

PR-762

**AGRICULTURE SECRETARIAT**

**NOTIFICATION - III**

**NO. AD/30/AMS/2011, Bangalore, Dated: 16.07.2011**

In exercise of the powers conferred by sub section (1) of section 13 of Seeds Act, 1966 (Central Act of 54 of 1966) read with rule 22 of the Seeds Rules 1968, the Government of Karnataka here by appoint the Officers specified in Column-(2) of the Table below to be the Seed Inspectors for the purpose of the said Act for the areas specified in the corresponding entries in column (3) thereof:

**TABLE**

| Sl. No. | Designation of Officers | Areas |
|---|---|---|
| 1 | 2 | 3 |
| 1. | The Joint Director of Agriculture-Yadgir District | within their respective jurisdiction |
| 2. | All the Assistant Directors of Agriculture (Subject Matter Specialists) working in the Office of the Joint Director of Agriculture Yadgir District | within their respective jurisdiction |
| 3. | Agricultural Officer (Information) and Agricultural Officer (Inputs) working in the office of the Joint Director of Agriculture, Yadgir District. | within their respective jurisdiction |

By Order and in the Name of the Governor of Karnataka

**PARANDHAMAIAH**

Under Secretary to Government,

Agriculture Department.

PR-763

**AGRICULTURE SECRETARIAT**

**NOTIFICATION - I**

**NO. AD/30/AMS/2011, Bangalore, Dated: 16.07.2011**

In exercise of the powers conferred by Clause_11 of the Seeds (Control) Order, 1983, the Government of Karnataka hereby appoints the Officer specified in Column-(2) of the Table below to be the Licencing Authority for the purpose of the said Order in respect of the area specified in the corresponding entries in column (3) thereof:

**TABLE**

| Sl. No. | Designation of Officers | Areas |
|---|---|---|
| 1 | 2 | 3 |
| 1. | The Joint Director of Agriculture-Yadgir District | within their respective jurisdiction |

By Order and in the Name of the Governor of Karnataka

**PARANDHAMAIAH**

Under Secretary to Government,

Agriculture Department.

PR-764

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 229 ಎಂಆರ್‌ಇ 2011, ಬೆಂಗಳೂರು, ದಿನಾಂಕ:14.07.2011**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ ಅಧಿನಿಯಮ, 1966, ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸವದತ್ತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದೆ:

| ಕ್ರ. ಸಂ. | ಸದಸ್ಯರ ಹೆಸರು ಶ್ರೀ/ ಶ್ರೀಮತಿ |
|---|---|
| 1. | ಪುಂಡಲೀಕ ಹೊನ್ನಪ್ಪ ಮೇಟಿ, ಸಾ: ಮಬನೂರ್, ತಾಲ್ಲೂಕು ಸವದತ್ತಿ. |
| 2. | ಜಿ.ಬಿ. ವಂಟಗೋಡಿ, ಸಾ: ಹಂಚಿನಾಳ, ತಾಲ್ಲೂಕು ಸವದತ್ತಿ. |
| 3. | ಅಜಿತ್ ದೇಸಾಯಿ, ಸಾ: ಯರಗಟ್ಟಿ, ತಾಲ್ಲೂಕು ಸವದತ್ತಿ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವ ಮೂರ್ತಿ**

ಪಿ.ಆರ್. 765

ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 30 ಸಿಎನ್‌ಎಸ್ 2011, ಬೆಂಗಳೂರು, ದಿನಾಂಕ:11.07.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 30 ಸಿಎನ್‌ಎಸ್ 2011, ದಿನಾಂಕ:19.05.2011ರಲ್ಲಿ ಕೋಲಾರ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಕೋಲಾರ ಜಿಲ್ಲೆ ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಪಿ. ಲಕ್ಷ್ಮೀನಾರಾಯಣಗೌಡ ಬಿನ್ ಚಿಕ್ಕಬುಳ್ಳಪ್ಪ, ಕಾಮದೇವನಹಳ್ಳಿ ಗ್ರಾಮ ಮತ್ತು ಅಂಚೆ, ಕೋಲಾರ ತಾಲ್ಲೂಕು ಹಾಗೂ ಜಿಲ್ಲೆ ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ: 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಎನ್. ರಾಮಸ್ವಾಮಿ ಬಿನ್ ನಾಗರಾಜು, ವಕಲೇರಿ ಹೋಬಳಿ, ಕೋಲಾರ ತಾಲ್ಲೂಕು ಇವರನ್ನು ಕೋಲಾರದ ಪ್ರಾಥಮಿಕ ಸಹಕಾರ ಕೃಷಿ ಹಾಗೂ ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಕೋಲಾರ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್. 766

ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಿಒ 77 ಸಿಎನ್‌ಎಸ್ 2008, ಬೆಂಗಳೂರು, ದಿನಾಂಕ:14.07.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 77 ಸಿಎನ್‌ಎಸ್ 2008, ದಿನಾಂಕ:27.03.2010ರಲ್ಲಿ ಬೀದರ್ ಸಹಕಾರ ಸಕ್ಕರೆ ಕಾರ್ಖಾನೆ, ನಿ., ಹಳ್ಳಿಖೇಡ ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ, ಇದರ ಆಡಳಿತ ಮಂಡಳಿಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ: 11)ರ ಪ್ರಕರಣ 29ರ ಉಪ ಪ್ರಕರಣ (1)ರ ಅಡಿಯಲ್ಲಿ ಮಾಡಿದ್ದ ಶ್ರೀಮತಿ ಮಾಯಾದೇವಿ ಬಸವತೀರ್ಥಪ್ಪ, ಹುಡಗಿ ಅಂಚೆ, ಹುಮ್ನಾಬಾದ್ ತಾಲ್ಲೂಕು ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ: 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀಮತಿ ಪದ್ಮಾವತಿ ಹಣಮಂತರಾವ, ಸಾ:ಬನ್ನಳ್ಳಿ, ಹುಮ್ನಾಬಾದ್ ತಾಲ್ಲೂಕು ಇವರನ್ನು ಬೀದರ್ ಸಹಕಾರ ಸಕ್ಕರೆ ಕಾರ್ಖಾನೆ, ನಿ., ಹಳ್ಳಿಖೇಡ, ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ, ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್. 767

ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 44 ಸಿಎನ್‌ಎಸ್ 2011, ಬೆಂಗಳೂರು, ದಿನಾಂಕ:12.07.2011**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಹೊಸಕೋಟೆ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಹೊಸಕೋಟೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡುತ್ತದೆ.

1) ಶ್ರೀ ಕೃಷ್ಣಪ್ಪ ಬಿನ್ ಕೆಂಚಪ್ಪ, ಆಲಪ್ಪನಹಳ್ಳಿ, ಲಕ್ಕೊಂಡಹಳ್ಳಿ ಅಂಚೆ, ಕಸಬಾ ಹೋಬಳಿ, ಹೊಸಕೋಟೆ ತಾಲ್ಲೂಕು.
2) ಶ್ರೀಮತಿ ನಸ್ರೀನ್ ತಾಜ್ ಕೋಂ ಫಯಾಜ್, ದೊಡ್ಡೇನಹಳ್ಳಿ, ಕೆ.ಸತ್ಯವಾರ ಅಂಚೆ, ನಂದಗುಡಿ ಹೋಬಳಿ, ಹೊಸಕೋಟೆ ತಾಲ್ಲೂಕು.
3) ಶ್ರೀ ಮುನಿಸ್ವಾಮಿ, ಮುತ್ತೂರು ಗ್ರಾಮ ಮತ್ತು ಅಂಚೆ, ಅನುಗೊಂಡನಹಳ್ಳಿ ಹೋಬಳಿ, ಹೊಸಕೋಟೆ ತಾಲ್ಲೂಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್. 768

ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 47 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ:08.07.2011**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಶಿವಲಿಂಗ ಉರುಫ್ ಲಾರಿಚನ್ನಪ್ಪ ಬಿನ್ ಬೋರೇಗೌಡ, ಟಿ.ಬಿ. ಬಡಾವಣೆ, ನಾಗಮಂಗಲ ಟೌನ್, ಕಸಬಾ ಹೋಬಳಿ, ಮಂಡ್ಯ ಜಿಲ್ಲೆ ಇವರನ್ನು ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ, ನಾಗಮಂಗಲ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್. 769

ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 128 ಸಿಎನ್‌ಎಸ್ 2010, ಬೆಂಗಳೂರು, ದಿನಾಂಕ:29.06.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ 128 ಸಿಎನ್‌ಎಸ್ 2010, ದಿನಾಂಕ:20.11.2010ರಲ್ಲಿ ಹುಮನಾಬಾದ್ ತಾಲ್ಲೂಕಿನ ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿ., ಹುಮ್ನಾಬಾದ್ ಬೀದರ್ ಜಿಲ್ಲೆ, ಇದರ ಆಡಳಿತ ಮಂಡಳಿಗೆ ಮಾಡಿದ್ದ ಶ್ರೀ ಮಾನಿಕರಾವ ರಾಮಣ್ಣ ವಾಡೇಕರ್ ಮು: ಗಡವಂತಿ, ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ, ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಮುಂದುವರೆದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ: 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ವೆಂಕಟ ಜಮಾದಾರ ಸಾ: ಸುಲ್ತಾನಾಬಾದ ವಾಡಿ, ಹುಮ್ನಾಬಾದ್ ತಾಲ್ಲೂಕು ಇವರನ್ನು ಹುಮ್ನಾಬಾದ್ ತಾಲ್ಲೂಕಿನ ಕೃಷಿ ಉತ್ಪನ್ನ ಮಾರಾಟ ಸಹಕಾರ ಸಂಘ ನಿ., ಹುಮ್ನಾಬಾದ್, ಬೀದರ್ ಜಿಲ್ಲೆ, ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ನೂಲಿ**

ಪಿ.ಆರ್. 770

ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 571 ವೆಚ್ಚ–12/11, ಬೆಂಗಳೂರು, ದಿನಾಂಕ:21.07.2011**

ಜಗಳೂರು ತಾಲ್ಲೂಕಿನ ರೂ.925.00 ಲಕ್ಷ ಅಂದಾಜು ಮೊತ್ತದ 20 ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಮತ್ತು ರೂ.28.00 ಲಕ್ಷ ಅಂದಾಜು ಮೊತ್ತದ 3 ಕುಡಿಯುವ ನೀರಿನ ಕಾಮಗಾರಿಗಳನ್ನು ನೇರವಾಗಿ ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್ (ಕೆ.ಆರ್.ಐ.ಡಿ.ಎಲ್.), ದಾವಣಗೆರೆ ಸಂಸ್ಥೆಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕೆ.ಆರ್.ಐ.ಡಿ.ಎಲ್. ಸಂಸ್ಥೆಯು ಕಾಮಗಾರಿಗಳನ್ನು ಬೇರೆಯವರ ಮುಖಾಂತರ ಕೈಗೊಳ್ಳುವುದಾದಲ್ಲಿ ಕೆ.ಟಿ.ಪಿ.ಪಿ. ಅಧಿನಿಯಮ ಮತ್ತು ನಿಯಮಗಳನ್ನು ಪಾಲಿಸಬೇಕು. ಉತ್ತಮ ಗುಣಮಟ್ಟದ ಕಾಮಗಾರಿಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯು ಧೃಡಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಡಿ. ಮಧುಚಂದ್ರ ತೇಜಸ್ವಿ**

ಪಿ.ಆರ್. 772

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ನಗರಾಭಿವೃದ್ಧಿ ಸಚಿವಾಲಯ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ನಅಇ 65 ಬೆಂರೂಪ್ರಾ 2011, ಬೆಂಗಳೂರು, ದಿನಾಂಕ:16.07.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 65 ಬೆಂರೂಪ್ರಾ 2011 ದಿನಾಂಕ:01.06.2011ರಲ್ಲಿ ದಾವಣಗೆರೆ ಜಿಲ್ಲೆ, ಚನ್ನಗಿರಿ ಪಟ್ಟಣಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ನ್ನು ವಿಸ್ತರಿಸಿ ಸ್ಥಳೀಯ ಯೋಜನಾ ಪ್ರದೇಶ ಘೋಷಿಸಿ ಆದೇಶ ಹೊರಡಿಸಲಾಗಿರುತ್ತದೆ. ಸದರಿ ಆದೇಶದಲ್ಲಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 4(ಎ) ರಡಿಯಲ್ಲಿ ಚನ್ನಗಿರಿ ಪಟ್ಟಣ ಪಂಚಾಯಿತಿ ಎಲ್ಲೆಯ ಕ್ಷೇತ್ರವನ್ನು ಚನ್ನಗಿರಿ ಸ್ಥಳೀಯ ಯೋಜನಾ ಪ್ರದೇಶವೆಂದು ಹಾಗೂ ಸದರಿ ಕಾಯ್ದೆಯ ಕಲಂ 2(7)(ಬಿ) ರನ್ವಯ ಪಟ್ಟಣ ಪಂಚಾಯ್ತಿಯು ಸ್ಥಳೀಯ ಯೋಜನಾ ಪ್ರದೇಶದ ಯೋಜನಾ ಪ್ರಾಧಿಕಾರವಾಗಿ ಕೆಲಸ ಕಾರ್ಯಗಳನ್ನು ನಿರ್ವಹಿಸತಕ್ಕದೆಂದು ಓದಿಕೊಳ್ಳತಕ್ಕದ್ದು.

ಉಳಿದಂತೆ ಅನುಬಂಧ–I ಮತ್ತು II ರಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಪಿ.ಆರ್. 774

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ನಗರಾಭಿವೃದ್ಧಿ ಸಚಿವಾಲಯ**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ನಅಇ 59 ಬೆಂರೂಪ್ರಾ 2011, ಬೆಂಗಳೂರು, ದಿನಾಂಕ:16.07.2011**

ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 59 ಬೆಂರೂಪ್ರಾ 2011 ದಿನಾಂಕ:07.05.2011ರಲ್ಲಿ ದಾವಣಗೆರೆ ಜಿಲ್ಲೆ, ಹೊನ್ನಾಳಿ ಪಟ್ಟಣಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ನ್ನು ವಿಸ್ತರಿಸಿ ಸ್ಥಳೀಯ ಯೋಜನಾ ಪ್ರದೇಶ ಘೋಷಿಸಿ ಆದೇಶ ಹೊರಡಿಸಲಾಗಿರುತ್ತದೆ. ಸದರಿ ಆದೇಶದಲ್ಲಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 4(ಎ) ರಡಿಯಲ್ಲಿ ಹೊನ್ನಾಳಿ ಪಟ್ಟಣ ಪಂಚಾಯಿತಿ ಎಲ್ಲೆಯ ಕ್ಷೇತ್ರವನ್ನು ಹೊನ್ನಾಳಿ ಸ್ಥಳೀಯ ಯೋಜನಾ ಪ್ರದೇಶವೆಂದು ಹಾಗೂ ಸದರಿ ಕಾಯ್ದೆಯ ಕಲಂ 2(7)(ಬಿ) ರನ್ವಯ ಪಟ್ಟಣ ಪಂಚಾಯ್ತಿಯು ಸ್ಥಳೀಯ ಯೋಜನಾ ಪ್ರದೇಶದ ಯೋಜನಾ ಪ್ರಾಧಿಕಾರವಾಗಿ ಕೆಲಸ ಕಾರ್ಯಗಳನ್ನು ನಿರ್ವಹಿಸತಕ್ಕದೆಂದು ಓದಿಕೊಳ್ಳತಕ್ಕದ್ದು.

ಉಳಿದಂತೆ ಅನುಬಂಧ–I ಮತ್ತು II ರಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಪಿ.ಆರ್. 775

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ: ಕಸಂವಾಪ್ರ 14 ಕರಾಗೆ 2008, ಬೆಂಗಳೂರು, ದಿನಾಂಕ:17.06.2011**

ದಿನಾಂಕ:01.06.2011ರ ಅಧಿಸೂಚನೆ ಸಂಖ್ಯೆ: ಕಸಂವಾಪ್ರ 14 ಕರಾಗೆ 2008 (ಭಾಗ–1)ರ ಅನುಬಂಧ–I, ಕ್ರ.ಸಂ.8ರ ಕಾಲಂ 6ರಲ್ಲಿ **"ಕರ್ನಾಟಕ ನಾಗರೀಕ ಸೇವಾ ನೇರ ನೇಮಕಾತಿ ನಿಯಮ 1983 ರಡಿಯಲ್ಲಿ ನೇರ ನೇಮಕಾತಿ"** ಎಂಬುದಕ್ಕೆ ಬದಲಾಗಿ **"ಕರ್ನಾಟಕ ನಾಗರೀಕ ಸೇವೆಗಳು (ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ನೇಮಕಾತಿ) ನಿಯಮಾವಳಿಗಳು 1983"** ರಡಿಯಲ್ಲಿ ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಗೀತಾಕುಮಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

ಪಿ.ಆರ್. 777

**WATER RESOURCES SECRETARIAT**

**NOTIFICATION**

**NO. WRD 4 KNN 2010, Bangalore, Dated: 25.07.2011**

In exercise of the powers conferred vide Article 151 of the Articles of Association of the Karnataka Neeravari Nigam Limited, Sri N. Lakshman Rao Peshwe has been nominated as the Managing Director with effect from 05.07.2011 in place of Sri D. Satya Murthy and consequent to this and in exercise of powers conferred vide Article 147(c) Sri D. Satya Murthy, Principal Secretary to the Government, Water Resources Department Continues to be the Director on the Board of Directors of Karnataka Neeravari Nigam Limited, Bangalore, with effect from 05.07.2011 and until further orders.

By Order and in the Name of the Governor of Karnataka

**I.D. DHAMAN**

Special Officer (I/c.),

Water Resources Department (Tech-4)

PR-778

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 679 ವೆಚ್ಚ–12/11, ಬೆಂಗಳೂರು, ದಿನಾಂಕ:22.07.2011**

ಕರ್ನಾಟಕ ರಾಜ್ಯದಲ್ಲಿನ ಕೈಗಾರಿಕಾ ತರಬೇತಿ ಸಂಸ್ಥೆಗಳನ್ನು ಉನ್ನತೀಕರಿಸಲು ಜರ್ಮನ್ ಸರ್ಕಾರಿ ಸ್ವಾಮ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ GIZ ಸಂಸ್ಥೆಯಿಂದ ವಾರ್ಷಿಕ 7.50 ಕೋಟಿ ರೂ.ಗಳಂತೆ ನಾಲ್ಕು ವರ್ಷ ಅವಧಿಗೆ (ಒಟ್ಟು 30 ಕೋಟಿ ರೂ.) ತಾಂತ್ರಿಕ ಮತ್ತು ಯೋಜನಾ ನಿರ್ವಹಣಾ ನೆರವನ್ನು ಪಡೆದುಕೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಕಲಂ 4(ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಕಾರ್ಮಿಕ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಕಾರ್ಮಿಕ ಇಲಾಖೆಯು ಧೃಡಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ.ಡಿ. ಮಧುಚಂದ್ರ ತೇಜಸ್ವಿ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

ಪಿ.ಆರ್. 779

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಇ 203 ಎಂಆರ್ಇ 2011, ಬೆಂಗಳೂರು, ದಿನಾಂಕ:19.07.2011**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ, ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಚಿಂತಾಮಣಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದೆ:

| ಕ್ರ. ಸಂ. | ಸದಸ್ಯರ ಹೆಸರು ಶ್ರೀಯುತರು/ ಶ್ರೀಮತಿ |
|---|---|
| 1. | ಶ್ರೀರಾಮರೆಡ್ಡಿ ಬಿನ್ ವೆಂಕಟರೆಡ್ಡಿ,<br>ಕೆ. ಹೊಸೂರು, ಕಸಬಾ ಹೋಬಳಿ, ಚಿಂತಾಮಣಿ ತಾಲ್ಲೂಕು. |

| ಕ್ರ. ಸಂ. | ಸದಸ್ಯರ ಹೆಸರು ಶ್ರೀಯುತರು/ ಶ್ರೀಮತಿ |
|---|---|
| 2. | ಎಸ್.ಎನ್. ಲೋಕೇಶ್ ಬಾಬು ಬಿನ್ ಎಸ್.ಎನ್. ನಾಗರಾಜ್, ಬುರುಡುಗುಂಟೆ, ಚಿಲಕಲನೇರ್ಪು ಹೋಬಳಿ, ಚಿಂತಾಮಣಿ ತಾಲ್ಲೂಕು |
| 3. | ಸುಮನ್ ಬಿನ್ ನಾಗಭೂಷಣ್, ಎಲ್.ಐ.ಸಿ. ಕಛೇರಿ ರಸ್ತೆ, ಚಿಂತಾಮಣಿ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ–1,
ಸಹಕಾರ ಇಲಾಖೆ.

ಪಿ.ಆರ್. 780

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 30 ಸಿಎನ್ಎಸ್ 2008, ಬೆಂಗಳೂರು, ದಿನಾಂಕ:14.07.2011**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ: 11) ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಎಂ. ಶಂಕರಪ್ಪ ಬಿನ್ ಮಲ್ಲಣ್ಣ, ಸಿದ್ದರಾಮೇಶ್ವರ ಸರ್ಕಲ್, 1ನೇ ರಸ್ತೆ, ಅಜ್ಜಂಪುರ, ತರೀಕೆರೆ ತಾಲ್ಲೂಕು ಇವರನ್ನು ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ತರೀಕೆರೆ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್. 782

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 16 ಸಿಎನ್ಎಸ್ 2010, ಬೆಂಗಳೂರು, ದಿನಾಂಕ:13.07.2011**

ಈ ಹಿಂದೆ ಸರ್ಕಾರದಿಂದ ಮಾಡಿರುವ ಎಲ್ಲಾ ನಾಮನಿರ್ದೇಶನಗಳನ್ನು ರದ್ದುಪಡಿಸಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ: 11) ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ವಿಜಯಕುಮಾರ ಬಿ. ಹಿರೇಮಠ, ತೋಟದಮನೆ, ಸಾ–ಕಿರವತ್ತಿ, ತಾ–ಯಲ್ಲಾಪುರ (ಉ.ಕ.) ರವರನ್ನು ಉತ್ತರ ಕನ್ನಡ ಜಿಲ್ಲೆ ಯಲ್ಲಾಪುರ ತಾಲ್ಲೂಕಿನ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಯಲ್ಲಾಪುರ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 783

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಒ 15 ಸಿಎನ್ಎಸ್ 2009, ಬೆಂಗಳೂರು, ದಿನಾಂಕ:14.07.2011**

ಈ ಹಿಂದೆ ಕರ್ನಾಟಕ ಸರ್ಕಾರವು ಅಧಿಸೂಚನೆ ಸಂಖ್ಯೆ: ಸಿಒ 15 ಸಿಎನ್ಎಸ್ 2009 ದಿನಾಂಕ:27.05.2010ರಲ್ಲಿ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಕಂಪ್ಲಿ ಒಕ್ಕಲುತನ ಹುಟ್ಟುವಳಿ ಮಾರಾಟ ಸಹಕಾರ ಸಂಘ ನಿ., ಕಂಪ್ಲಿ ಇದರ ಆಡಳಿತ ಮಂಡಳಿಗೆ ನಾಮನಿರ್ದೇಶನ ಮಾಡಿದ್ದ ಶ್ರೀಮತಿ ಲತಾ ಕೋಂ ಶ್ರೀ ರೇಣುಕಾಗೌಡ, ಸನಾಪುರ, ಹೊಸಪೇಟೆ ತಾಲ್ಲೂಕು ಇವರ ನಾಮನಿರ್ದೇಶನವನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ: 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಶ್ರೀಮತಿ ಎಮ್ಮಿಗನೂರು ಬಸಮ್ಮ ಕೋಂ ಶ್ರೀ ವೈ. ಮಲ್ಲಪ್ಪ, ಸಣಾಪುರ ಗ್ರಾಮ, ಹೊಸಪೇಟೆ ತಾಲ್ಲೂಕು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆವಿಗೂ ನಾಮನಿರ್ದೇಶನ ಮಾಡುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 785